# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 863

ಮಾನ್ಯ ಸದಸ್ಯರ ಹೆಸರು : ಶ್ರೀ ಕೆ.ಟಿ.ಶ್ರೀಕಂಠೇಗೌಡ (ಪದವೀಧರರ ಕ್ಷೇತ್ರ)

ಉತ್ತರಿಸುವ ದಿನಾಂಕ : 28.09.2020

ಉತ್ತರಿಸುವ ಸಚಿವರು : ಪ್ರಾಥಮಿಕ & ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
| --- | --- | --- |
| ಅ | ಶಿಕ್ಷಕರು/ಉಪನ್ಯಾಸಕರ 'ಕಾಲ್ಪನಿಕ ವೇತನ ಬಡ್ತಿ' (ಅನುದಾನಿತ ಶಾಲಾ-ಕಾಲೇಜುಗಳ)ಬಗ್ಗೆ ಬಸವರಾಜ್ ಹೊರಟ್ಟಿರವರ ನೇತೃತ್ವದಲ್ಲಿ ಸಮಿತಿಯನ್ನು ಯಾವಾಗ ರಚಿಸಲಾಯಿತು; | ಶ್ರೀ ಬಸವರಾಜ ಹೊರಟ್ಟಿ ರವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ದಿ:25.09.2014ರಂದು ರಚಿಸಲಾಗಿತ್ತು. ಆರ್ಥಿಕ ಪರಿಣಾಮಗಳನ್ನು ಕರಾರುವಕ್ಕಾಗಿ ನಿರ್ಣಯಿಸುವ ಸಲುವಾಗಿ ಈ ಸಮಿತಿಯನ್ನು ಪುನರುಜ್ಜೀವನಗೊಳಿಸಿ ದಿ:11.07.2017ರಂದು ವಿಶೇಷ ಸದನ ಸಮಿತಿಯನ್ನು ಪುನರ್ ರಚಿಸಲಾಗಿದೆ. |
| ಆ | ಸದರಿ ಸಮಿತಿಯು ಯಾವಾಗ ವರದಿಯನ್ನು ಸಲ್ಲಿಸಿದೆ; ವರದಿಯು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಸಮಿತಿಯು ದಿ:17.03.2015 ಮತ್ತು 06.02.2018ರಂದು ಎರಡು ವರದಿಗಳನ್ನು ಸಲ್ಲಿಸಿದ್ದು, ವರದಿಯಲ್ಲಿನ ಶಿಫಾರಸ್ಸುಗಳು ಸರ್ಕಾರದ ಗಮನಕ್ಕೆ ಬಂದಿರುತ್ತವೆ. |
| ಇ | ಈ ಸಮಿತಿಯ ವರದಿಯ ಜಾರಿ ಕುರಿತು ಸರ್ಕಾರದ ನಿಲುವೇನು? ಈ ವರದಿಯನ್ನು ಯಾವಾಗ ಜಾರಿಗೆ ತರಲಾಗುವುದು; | ಅನುದಾನ ಸಂಹಿತೆಯ ಪ್ರಕಾರ ಅನುದಾನಕ್ಕೊಳಪಟ್ಟ ಸಿಬ್ಬಂದಿಗೆ ಅನುದಾನ ದೊರೆತ ದಿನಾಂಕದಿಂದ ಮಾತ್ರ ಕನಿಷ್ಠ ವೇತನ ನಿಗದಿ ಮಾಡಬೇಕೆಂದು ಹಿಂದಿನ ಸೇವಾವಧಿಯನ್ನು ಯಾವುದೇ ಸೇವಾ ಸೌಲಭ್ಯಕ್ಕೆ ಪರಿಗಣಿಸುವಂತಿಲ್ಲ. ಈ ಸಂಬಂಧ ಸರ್ಕಾರವು ದಿ:01.06.1995 ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂಧಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೇ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ 2014ನ್ನು ಜಾರಿಗೆ ತರಲಾಗಿದೆ.<br>ಈ ಅಧಿನಿಯಮವನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಪ್ರಶ್ನಿಸಿರುವ ರಿಟ್ ಅರ್ಜಿಗಳಾದ 21216/2014ಮತ್ತು 14307/2014 ಮತ್ತು ತತ್ಸಂಬಂಧದ ಪ್ರಕರಣಗಳಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:10.07.2015ರಂದು ನೀಡಿದ ತೀರ್ಪಿನಲ್ಲಿ ಸದರಿ ಅಧಿನಿಯಮವನ್ನು "struck down" ಮಾಡಿರತ್ತದೆ.<br>ಮೇಲಿನ ಮಾನ್ಯ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ |

| | | |
|---|---|---|
| | | ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯ ಬೆಂಗಳೂರು ಇಲ್ಲಿ ರಿಟ್ ಅಪೀಲ್ ಸಂಖ್ಯೆ:2476/2015 ಮತ್ತು 2467/2015ನ್ನು ದಾಖಲಿಸಿದೆ. ಮೇಲಿನ ರಿಟ್ ಅರ್ಜಿಗಳಲ್ಲಿ ನೀಡಿದ ತೀರ್ಪಿಗೆ ದಿ:27.11.2015ರಂದು ತಡೆಯಾಜ್ಞೆ ನೀಡಿರುತ್ತದೆ . ಸದರಿ ತಡೆಯಾಜ್ಞೆಯು ಪ್ರಸ್ತುತ ಜಾರಿಯಲ್ಲಿದ್ದು, ಪ್ರಕರಣವು ಮಾನ್ಯ ನ್ಯಾಯಾಲಯದಲ್ಲಿ ಬಾಕಿಯಿರುತ್ತದೆ.<br>ಸಮಿತಿಯ ವರದಿ ಮತ್ತು ಇಲಾಖೆಗಳಲ್ಲಿನ ವಾಸ್ತವ ಅಂಕಿಅಂಶಗಳನ್ನು ಪರಿಶೀಲಿಸಲಾಗಿ ಹಾಲಿ ನೀಡಲಾಗುತ್ತಿರುವ ವೇತನಕ್ಕೆ ಅನುದಾನ ರಹಿತ ಅವಧಿಯನ್ನು ಪರಿಗಣನೆಗೆ ತೆಗೆದುಕೊಂಡು ವೇತನವನ್ನು ಪರಿಷ್ಕರಿಸಿದಲ್ಲಿ ಹೆಚ್ಚುವರಿಯಾಗಿ ವಾರ್ಷಿಕವಾಗಿ ರೂ.359.87/-ಕೋಟಿಗಳ ಅನುದಾನವು ಬೇಕಾಗುತ್ತದೆ. ಆದರೆ ಅವರಿಗೆ ಹಿಂಬಾಕಿ ಮತ್ತು ಪಿಂಚಣಿಗಾಗಿ ತಗಲುವ ಅಂದಾಜು ವೆಚ್ಚವು ಪ್ರಸ್ತಾಪಿತ ರೂ.359.87/-ಕೋಟಿಗಳಲ್ಲಿ ಒಳಗೊಂಡಿರುವುದಿಲ್ಲ. ಸದರಿ ಮೊತ್ತವಾದ ರೂ.359.87/- ಕೋಟಿ ಒಂದು ವರ್ಷಕ್ಕೆ ಬೇಕಾದ ಹೆಚ್ಚುವರಿ ಮೊತ್ತವಾಗುತ್ತದೆ. ಈ ಅನುಕೂಲ ಪಡೆಯುವ ಸಿಬ್ಬಂದಿ ಪೂರ್ಣ ಸೇವಾವಧಿಯಲ್ಲಿ ಪಡೆಯುವ ಮೊತ್ತದ ಒಟ್ಟು ಮೊತ್ತದ ಲೆಕ್ಕಾಚಾರ ಇಲಾಖೆಗಳಲ್ಲಿ ಇನ್ನು ಆಗಿರುವುದಿಲ್ಲ ಹಾಗೆಯೇ ನಿವೃತ್ತಿ ಸೌಲಭ್ಯಗಳ ಒಟ್ಟಾರೆ ಆರ್ಥಿಕ ಹೊರೆ ರೂ.1637.61/-ಕೋಟಿಗಳಾಗಿದ್ದು ಇದರ ವರ್ಷವಾರು ಆರ್ಥಿಕ ಹೊರೆ ಸಹ ಲೆಕ್ಕಹಾಕಿರುವುದಿಲ್ಲ , ಈ ಎರಡೂ ಮೊತ್ತಗಳ ಮಾಹಿತಿಯನ್ನು ಸಂಗ್ರಹಿಸಲಾಗುತ್ತಿದೆ. ಅನುದಾನರಹಿತ ಸೇವಾವಧಿಯ ಸಂಬಂಧ ನೀಡಬೇಕಾದ ವೇತನ ಬಾಕಿ ಮೊತ್ತ ರೂ.3083.54 ಕೋಟಿಗಳೆಂದು ಅಂದಾಜಿಸಲಾಗಿದೆ. |
| | | ಮೇಲ್ಕಂಡ ಅಂಶಗಳ ಹಿನ್ನೆಲೆಯಲ್ಲಿ ಸಮಿತಿಯ ಶಿಫಾರಸ್ಸುಗಳನ್ನು ಜಾರಿಗೆ ತರುವಲ್ಲಿ ನಿರ್ದಿಷ್ಟ ನಿಲುವನ್ನು ತಳೆಯಲು ಸರ್ಕಾರಕ್ಕೆ ಸಾಧ್ಯವಾಗಿರುವುದಿಲ್ಲ. |

ಸಂ:ಇಪಿ278ಎಸ್ಇಎಸ್2020

(ಎಸ್ ಸುರೇಶ್ ಕುಮಾರ್)

ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ

ಹಾಗೂ ಸಕಾಲ ಸಚಿವರು